# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 619 (666) |
| ಮಾನ್ಯ ಸದಸ್ಯರ ಹೆಸರು | ಶ್ರೀ ವಿಜಯ ಸಿಂಗ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 14/12/2020 |
| ಉತ್ತರಿಸಬೇಕಾದ ಸಚಿವರು | ಮಾನ್ಯ ಆರೋಗ್ಯ & ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಬೀದರ್ ನಗರ ಬ್ರಿಮ್ಸ್ ಕಾಲೇಜಿನಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರದ ತನಿಖೆ ಯಾವ ಹಂತದಲ್ಲಿದೆ; (ವಿವರ ನೀಡುವುದು)</td><td rowspan="3">ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಲ್ಲಿನ ಖರೀದಿ ಪ್ರಕ್ರಿಯಯಲ್ಲಿ ಕೆ.ಟಿ.ಪಿ.ಪಿ. ನಿಯಮಗಳನ್ನು ಉಲ್ಲಂಘಿಸಿ, ಸಿಬ್ಬಂದಿ ನೇಮಕಾತಿಯಲ್ಲಿ ಹಾಗೂ ಇತರೆ ಕಾಮಗಾರಿಗಳಲ್ಲಿ ನಿರ್ದೇಶಕರು, ವೈದ್ಯಕೀಯ ಅಧೀಕ್ಷಕರು, ಕಛೇರಿ ಅಧೀಕ್ಷಕರು, ಪ್ರಥಮ ದರ್ಜೆ ಸಹಾಯಕರಾದ ಶ್ರೀ ಪ್ರಕಾಶ ಮಾಳಗೆ ಮತ್ತು ಶ್ರೀ ಬಾಬು ಕೋಟೆ ಹಾಗೂ ನಿವೃತ್ತ ಅಧೀಕ್ಷಕರಾದ ಶ್ರೀ ಮಾಚಿ ಕಲ್ಲಪ್ಪ ಇವರುಗಳು ನಡೆಸಿರುವವರೆನ್ನಲಾದ ಅವ್ಯವಹಾರಗಳ ಕುರಿತು ಸಮಗ್ರವಾದ ತನಿಖೆ ನಡೆಸಲು ಸರ್ಕಾರವು ದಿನಾಂಕ: 17.07.2017ರಂದು ತ್ರಿ-ಸದಸ್ಯ ಸಮಿತಿಯನ್ನು ನೇಮಿಸಿ, ಶ್ರೀ ನಿಶ್ಚಿತ್ ವಿ.ಡಿ. ಆರ್ಥಿಕ ಸಲಹೆಗಾರರು, ಕಿದ್ವಾಯಿ ಸ್ಮಾರಕ ಗಂಥಿ ಸಂಸ್ಥೆ ಇವರನ್ನು ಅಧಿಸೂಚನೆ ಸಂಖ್ಯೆ: ಆಕುಕ 36 ಎಂಎಸ್ಎಫ್ 2016, ದಿನಾಂಕ: 09.02.2018 ರನ್ವಯ ತನಿಖಾಧಿಕಾಯನ್ನಾಗಿ ನೇಮಿಸಲಾಗಿತ್ತು. ಆದರಂತೆ ತನಿಖಾ ಸಮಿತಿ ಮತ್ತು ತನಿಖಾಧಿಕಾರಿಯವರು ಸಲ್ಲಿಸಿದ ವರದಿಯನ್ನು ಪರಿಶೀಲಿಸಲಾಗಿ, ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಮತ್ತು ಅಪರ ಪೊಲೀಸ್ ಮಹಾನಿರ್ದೇಶಕರು, ಭ್ರಷ್ಟಾಚಾರ ನಿಗ್ರಹದಳ, ಬೆಂಗಳೂರು ಇವರಿಂದ ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಲ್ಲಿ ಸಿಬ್ಬಂದಿ ನೇಮಕ ಮತ್ತು ಇತರೆ ಕಾಮಗಾರಿ/ಖರೀದಿಗಳಲ್ಲಿ ಹಣದ ದುರುಪಯೋಗ ಹಾಗೂ ಅವ್ಯವಹಾರ ನಡೆದಿರುವುದಾಗಿ ವರದಿ ಸ್ವೀಕೃತವಾಗಿದ್ದು, ಸದರಿ ವರದಿಯಲ್ಲಿ ಬೀದರ್ ವೈದ್ಯಕೀಯ ಸಂಸ್ಥೆಯ ಅಧಿಕಾರಿ/ನೌಕರರು ಅಧಿಕಾರಿ/ನೌಕರರ ವಿರುದ್ಧದ ಆರೋಪಗಳ ಕುರಿತು ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ 1988ರ ಕಲಂ 13(1)(ಡಿ) ಮತ್ತು 13(2) ರಡಿಯಲ್ಲಿ ಮೊಕದ್ದಮೆ ದಾಖಲಿಸಿ ತನಿಖೆ ಕೈಗೊಳ್ಳಲು ಸರ್ಕಾರದ ಆದೇಶ ಸಂಖ್ಯೆ:ಆಕುಕ 122 ಎಂಎಸ್ಎಫ್ 2018, ದಿನಾಂಕ: 29.06.2018 ರಲ್ಲಿ ಭ್ರಷ್ಟಚಾರ ನಿಗ್ರಹ ದಳಕ್ಕೆ ಅನುಮತಿ ನೀಡಿ ಆದೇಶಿಸಲಾಗಿದ್ದು.<br><br>ಸದರಿ ಅಭಿಯೋಜನಾ ಮಂಜೂರಾತಿಗೆ ಮಾನ್ಯ ಉಚ್ಛ ನ್ಯಾಯಾಲಯ, ಬೆಂಗಳೂರು ಪೀಠ ಇಲ್ಲಿ ಡಾ|| ಚನ್ನಣ್ಣ ಸಿ., & ಡಾ|| ಶಿವಕುಮಾರ್ ಶೆಟಕಾರ್ ಇವರು ಸಲ್ಲಿಸಿರುವ W.P. No. 28544-28545/2018 ರಲ್ಲಿ, ಶ್ರೀ ಪ್ರಕಾಶ ಮಾಳಗೆ, ಶ್ರೀ ಮಾಚೆ ಕಲ್ಲಪ್ಪ (ದಿ), ಶ್ರೀ ಬಾಬು ಕೋಟೆ, ಮತ್ತು ಶ್ರೀ ಪ್ರಕಾಶ ಮಡಿವಾಳ W.P. No. 29892-29895/2018 ರಲ್ಲಿ, ಶ್ರೀ ಆನಂದ ಸಾಗರ ರೆಡ್ಡಿ ಇವರು ಸಲ್ಲಿಸಿರುವ W.P. No. 38416/2018 ರಲ್ಲಿ ಮತ್ತು ಶ್ರೀಮತಿ ವರ್ಷ ದೇಶಮುಖ್ ಇವರು ಸಲ್ಲಿಸಿರುವ W.P. No. 1613/2019 ರಲ್ಲಿ ಮಾನ್ಯ ನ್ಯಾಯಾಲಯವು ತಡೆಯಾಜ್ಞೆಯನ್ನು ನೀಡಿರುತ್ತದೆ.<br><br>ತಡೆಯಾಜ್ಞೆಯನ್ನು ತೆರವುಗೊಳಿಸಲು W.P. No. 38416/2018 ರಲ್ಲಿ ಸರ್ಕಾರಿ ವಕೀಲರನ್ನು ಅಧಿಕೃತಗೊಳಿಸಿ ದಿನಾಂಕ:10/03/2020 ರಂದು ಸರ್ಕಾರಿ ವಕೀಲರಿಗೆ ಕಂಡಿಕೆವಾರು ಪರಾಗಳನ್ನು ಒದಗಿಸಲಾಗಿದೆ.<br><br>ಮುಂದುವರೆದು, ಸದರಿ ಪ್ರಕರಣಕ್ಕೆ ಸಂಬಂಧಿಸಿದ ಅಧಿಕಾರಿ/ನೌಕರರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ಉದ್ದೇಶಿಸಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸಿಬ್ಬಂದಿಗಳು ಹಾಗೂ ಯೋಜನಾ ಇಲಾಖೆಯ ಅಧಿಕಾರಿಗೆ ಸಂಬಂಧಿಸಿದಂತೆ ಸದರಿ ಇಲಾಖೆಗಳಿಂದ ಸಹಮತಿಯನ್ನು ಪಡೆದು, ಶ್ರೀ ಮಾಚೆ ಕಲ್ಲಪ್ಪ, ನಿವೃತ್ತ ಕಛೇರಿ ಅಧೀಕ್ಷಕರು (ದಿವಂಗತ), ಶ್ರೀ ಶಿವಾಜಿ, ದ್ವಿ.ದ.ಸ. (ಗುತ್ತಿಗೆ ನೌಕರರು) ಇವರುಗಳನ್ನು ಹೊರತುಪಡಿಸಿ, ಉಳಿದ 8 ಅಧಿಕಾರಿ/ನೌಕರರುಗಳ ವಿರುದ್ಧ ವೈದ್ಯಕೀಯ ಶಿಕ್ಷಣ ಇಲಾಖೆಯ ವತಿಯಿಂದ ಜಂಟಿ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯನ್ನು ನೇಮಿಸಿ ದಿನಾಂಕ:05/01/2021ರಂದು ಆದೇಶ ಹೊರಡಿಸಿ ಕ್ರಮ ಜರುಗಿಸಲಾಗಿದೆ.</td></tr>
<tr><td>ಆ)</td><td>ಬ್ರಿಮ್ಸ್‌ನಲ್ಲಿ ನಡೆದ ಅವ್ಯವಹಾರಕ್ಕೆ ಕಾರಣರಾದವರು ಎನ್ನಲಾದ ಸಿಬ್ಬಂದಿಗಳನ್ನು ಅದೇ ಸ್ಥಳದಲ್ಲಿ ಮುಂದುವರೆಸಿರುವುದು ಸರ್ಕಾರದ ಗಮನಕ್ಕೆ ಬಂದಿಯೇ; ಅವರುಗಳನ್ನು ಇಲಾಖೆಗೆ ಕಳುಹಿಸದಿರುವುದಕ್ಕೆ ಕಾರಣವೇನು; (ವಿವರ ನೀಡುವುದು)</td></tr>
<tr><td>ಇ)</td><td>ಕಳೆದ ಅಧಿವೇಶನದಲ್ಲಿ ತನಿಖೆ ನಡೆಸುವುದಾಗಿ ಸರ್ಕಾರ ಭರವಸೆ ನೀಡಿದ್ದರು ಇಲ್ಲಿಯವರೆಗೆ ತನಿಖೆ ಆರಂಭಿಸದಿರುವುದಕ್ಕೆ ಕಾರಣವೇನು? ಈ ಕುರಿತು ಸರ್ಕಾರದ ನಿಲುವೇನು;</td></tr>
</table>

| | | |
|---|---|---|
| | | ಸದರಿ ಆದೇಶವನ್ನು ಪ್ರಶ್ನಿಸಿ ಡಾ॥ ಚನ್ನಣ್ಣ ಸಿ. ಹಾಗೂ ಡಾ॥ ಶಿವಕುಮಾರ ಶೆಟಕಾರ ಇವರು ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು ಇಲ್ಲಿ ರಿಟ್ ಪಿಟೀಷನ್ ಸಂ: 4177/2021 (S-RES) ದಾಖಲಿಸಿ ದಿನಾಂಕ:26/02/2021 ರಂದು ತಡೆಯಾಜ್ಞೆ ಪಡೆದಿರುತ್ತಾರೆ. ಹಾಗೂ ಶ್ರೀ ಪ್ರಕಾಶ ಎಸ್. ಮಡಿವಾಳ, ಶ್ರೀಮತಿ ವರ್ಷಾ ಹಾಗೂ ಶ್ರೀ ಬಾಬು ಕೋಟೆ ಇವರು ಉಚ್ಚ ನ್ಯಾಯಾಲಯ ಕಲಬುರ್ಗಿ ಪೀಠ ಇಲ್ಲಿ ರಿಟ್ ಪಿಟೀಷನ್ ಸಂ: 200587/2021 ದಾಖಲಿಸಿ ದಿನಾಂಕ:17/03/2021 ರಂದು ಹಾಗೂ ಶ್ರೀ ಆನಂದ ಸಾಗರ್ ರೆಡ್ಡಿ ಇವರು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ರಿಟ್ ಅರ್ಜಿ ಸಂ: 1650/2021ರಲ್ಲಿ ದಿನಾಂಕ:02/06/2021ರಂದು ತಡೆಯಾಜ್ಞೆಯನ್ನು ಪಡೆದಿರುತ್ತಾರೆ. ಸದರಿ ತಡೆಯಾಜ್ಞೆಗಳನ್ನು ತೆರವುಗೊಳಿಸಲು ಸರ್ಕಾರಿ ವಕೀಲರನ್ನು ಅಧಿಕೃತಗೊಳಿಸಿ ದಿನಾಂಕ:27/09/2021 ರಂದು ಸರ್ಕಾರಿ ವಕೀಲರಿಗೆ ಕಂಡಿಕೆವಾರು ಷರಾಗಳನ್ನು ಒದಗಿಸಲಾಗಿರುತ್ತದೆ.<br><br>ಶ್ರೀಮತಿ ವರ್ಷಾ, ಪ್ರ.ದ.ಸ. ಇವರ ವಿರುದ್ಧ ಶಿಸ್ತು ಕ್ರಮ ಬಾಕಿಯಿರಿಸಿ, ನಿರ್ದೇಶಕರು, ಬೀದರ್ ವೈ.ವಿ.ಸಂಸ್ಥೆ ಇವರು ಸದರಿಯವರನ್ನು ಅಮಾನತ್ತಿನಲ್ಲಿಟ್ಟು ದಿನಾಂಕ:16/03/2021ರಂದು ಆದೇಶಿಸಲಾಗಿದೆ. ಹಾಗೂ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರು ಶ್ರೀ ಪ್ರಕಾಶ ಶರಣಪ್ಪಾ ಮಡಿವಾಳ, ಶ್ರೀ ಪ್ರಕಾಶ ಮಾಳಗೆ, ಶ್ರೀ ಬಾಬು ಕೋಟೆ ಇವರುಗಳ ವಿರುದ್ಧದ ಆರೋಪದ ಬಗ್ಗೆ ಶಿಸ್ತು ಕ್ರಮ ಬಾಕಿ ಇರಿಸಿ ಅಮಾನತ್ತುಗೊಳಿಸಿ ದಿನಾಂಕ:16/03/2021ರಂದು ಆದೇಶಿಸಿರುತ್ತಾರೆ. ಹಾಗೂ ಸದರಿಯವರುಗಳನ್ನು ದಿ:17/03/2021 ರಿಂದ ಜಾರಿಗೆ ಬರುವಂತೆ ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಿಂದ ಬಿಡುಗಡೆಗೊಳಿಸಲಾಗಿರುತ್ತದೆ.<br><br>ಸದರಿ ಶಿಸ್ತು ಕ್ರಮವನ್ನು ಪ್ರಶ್ನಿಸಿ ಶ್ರೀ ಪ್ರಕಾಶ ಎಸ್. ಮಡಿವಾಳ, ಕಛೇರಿ ಅಧೀಕ್ಷಕರು ಮತ್ತು ಶ್ರೀ ಪ್ರಕಾಶ ಬಿನ್ ಸೈದಪ್ಪಾ ಮಾಳಗೆ, ಪ್ರ.ದ.ಸ. ಇವರು ಹಾಗೂ ಶ್ರೀ ಬಾಬು ಕೋಟೆ, ಸಹಾಯಕ ಆಡಳಿತಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಔರಾದ್ (ಬಿ) ರವರುಗಳು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ ಕಲಬುರಗಿಯಲ್ಲಿ W.P. No. 200799/2021 ರಲ್ಲಿ ದಾವೆ ದಾಖಲಿಸಿದ್ದು, ಮಾನ್ಯ ನ್ಯಾಯಾಲಯವು ಸದರಿ ಪ್ರಕರಣದಲ್ಲಿ ಶ್ರೀ ಬಾಬು ಕೋಟೆ ಸಹಾಯಕ ಆಡಳಿತಾಧಿಕಾರಿಗಳು, ಸಾರ್ವಜನಿಕ ಆಸ್ಪತ್ರೆ, ಔರಾದ್ (ಬಿ) ರವರನ್ನು ಹೊರತುಪಡಿಸಿ, ಉಳಿದ ಅರ್ಜಿದಾರರ ಮನವಿಗೆ ಪುರಸ್ಕರಿಸಿ ನ್ಯಾಯಾಲಯವು ಆಡಳಿತ ನ್ಯಾಯಮಂಡಳಿಗಳ (ತಿದ್ದುಪಡಿ) ಕಾಯ್ದೆ 1986ರನ್ವಯ ಸದರಿ ಪ್ರಕರಣವನ್ನು ಅರ್ಜಿದಾರರು ಇಚ್ಛಿಸಿದಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ ದಿನಾಂಕ:27.08.2021ರ ತೀರ್ಪನ್ನು ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಪ್ರಶ್ನಿಸಲು ಸ್ವಾತಂತ್ರ್ಯ ನೀಡಿ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ WP ಸಂಖ್ಯೆ 200799/2021 & WP ಸಂಖ್ಯೆ 201560/2018 ಗಳನ್ನು ವಜಾಗೊಳಿಸಿರುತ್ತದೆ.<br><br>ಆದುದರಿಂದ, ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಪ್ರಕಾಶ ಎಸ್. ಮಡಿವಾಳ, ಕಛೇರಿ ಅಧೀಕ್ಷಕರು ಮತ್ತು ಶ್ರೀ ಪ್ರಕಾಶ ಬಿನ್ ಸೈದಪ್ಪಾ ಮಾಳಗೆ, ಪ್ರ.ದ.ಸ. ಇವರುಗಳ ವಿರುದ್ಧ ಶಿಸ್ತು ಕ್ರಮ ಜಾರಿಗೊಳಿಸಿ, ಅಮಾನತ್ತು ಆದೇಶ ನೀಡಿರುವಂತೆ ಯಥಾಸ್ಥಿತಿ ಕಾಯ್ದಿರಿಸಿ, ಆದೇಶಿಸಲಾಗಿರುತ್ತದೆ. ಹಾಗೂ ಈ ಸಂಬಂಧ ಸಂಸ್ಥೆಯಿಂದ ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ Caveat ಅರ್ಜಿ ದಾಖಲು ಮಾಡಲಾಗಿರುತ್ತದೆ. |

<u>**ಕಡತ ಸಂ: ಎಂಇಡಿ 488 ಎಂ ಎಸ್ ಎಫ್ 2021**</u>

**(ಎ. ಶ್ರೀನಿಧಿ)**
**ಸರ್ಕಾರದ ಅಧೀನ ಕಾರ್ಯದರ್ಶಿ-3,**
**ವೈದ್ಯಕೀಯ ಶಿಕ್ಷಣ ಇಲಾಖೆ.**